# ಕರ್ನಾಟಕ ವಿಧಾನ ಪರಿಷತ್ತು

144ನೇ ಅಧಿವೇಶನ 2021

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 125(188)

ಮಾನ್ಯ ಸದಸ್ಯರ ಹೆಸರು: ಡಾ: ತೇಜಸ್ವಿನಿ ಗೌಡ(ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸುವ ಸಚಿವರು: ಮಾನ್ಯ ಉನ್ನತ ಶಿಕ್ಷಣ ಸಚಿವರು

ಉತ್ತರಿಸಬೇಕಾದ ದಿನಾಂಕ: 13-09-2021

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಖಾಸಗಿ ವಿಶ್ವವಿದ್ಯಾಲಯಗಳ ಇಂಜಿನೀಯರಿಂಗ್ ಕೋರ್ಸ್‌ಗಳಿಗೆ ನಿಗದಿತ ವಿದ್ಯಾರ್ಥಿಗಳ ಪ್ರಮಾಣಕ್ಕಿಂತ ಹೆಚ್ಚುವರಿ ಪ್ರವೇಶ ಮಾಡಿಕೊಂಡಿರುವ ಕುರಿತು ಪರಿಶೀಲಿಸಲು ಸರ್ಕಾರ ಯಾವುದಾದರೂ ಉನ್ನತ ಮಟ್ಟದ ಸಮಿತಿಯನ್ನು ಸ್ಥಾಪಿಸಿದೆಯೇ; | ಹೌದು |
| ಆ) | ಸಮಿತಿ ಸ್ಥಾಪನೆಯಾಗಿದ್ದಲ್ಲಿ, ಆ ಉನ್ನತ ಮಟ್ಟದ ಸಮಿತಿಯ ಅಧ್ಯಕ್ಷರು ಹಾಗೂ ಸದಸ್ಯರ ಮಾಹಿತಿ ನೀಡುವುದು; | ಉನ್ನತ ಮಟ್ಟದ ಸಮಿತಿಯ ಅಧ್ಯಕ್ಷರು ಹಾಗೂ ಸದಸ್ಯರ ಮಾಹಿತಿಯನ್ನು **ಅನುಬಂಧ-01ರಲ್ಲಿ** ಒದಗಿಸಲಾಗಿದೆ. |
| ಇ) | ಖಾಸಗಿ ವಿಶ್ವವಿದ್ಯಾಲಯಗಳು ಕರ್ನಾಟಕ ವಿದ್ಯಾರ್ಥಿಗಳಿಗೆ ಇಂಜಿನೀಯರಿಂಗ್ ಕೋರ್ಸ್‌ಗಳಲ್ಲಿ ಎಷ್ಟು ಪ್ರಮಾಣದ ಸೀಟು ಹಂಚಿಕೆ ಮಾಡಿದ್ದಾರೆ? (ಮಾಹಿತಿ ನೀಡುವುದು) | ಖಾಸಗಿ ವಿಶ್ವವಿದ್ಯಾಲಯಗಳ ಎಲ್ಲಾ ಕೋರ್ಸುಗಳ ಪ್ರವೇಶದಲ್ಲಿ ಶೇಕಡಾ ನಲವತ್ತರಷ್ಟನ್ನು ಕರ್ನಾಟಕ ರಾಜ್ಯದ ವಿದ್ಯಾರ್ಥಿಗಳಿಗೆ ಮೀಸಲಿಡುವ ಅವಕಾಶ ಕಲ್ಪಿಸುವ ಉಪಬಂಧವನ್ನು ರಾಜ್ಯದ ಎಲ್ಲಾ ಖಾಸಗಿ ವಿಶ್ವವಿದ್ಯಾಲಯಗಳ ಅಧಿನಿಯಮಗಳಲ್ಲಿ ಅಳವಡಿಸಲಾಗಿದೆ. |

**ಸಂಖ್ಯೆ: ಇಡಿ/194/ಯುಆರ್‌ಸಿ/2021**

(ಡಾ|| ಅಶ್ವತ್ಥ್‌ನಾರಾಯಣ ಸಿ.ಎನ್)

ಉನ್ನತ ಶಿಕ್ಷಣ, ಐಟಿ ಮತ್ತು ಬಿಟಿ, ವಿಜ್ಞಾನ ಮತ್ತು

ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು

ಜೀವನೋಪಾಯ ಇಲಾಖೆಗಳ ಸಚಿವರು

ಅನುಬಂಧ - 01

(59)

ಕರ್ನಾಟಕ ಸರ್ಕಾರ

ಸಂಖ್ಯೆ: ಇಡಿ 385 ಯುಆರ್‌ಸಿ 2015.

ಕರ್ನಾಟಕ ಸರ್ಕಾರದ ಸಚಿವಾಲಯ.
ಬಹುಮಹಡಿ ಕಟ್ಟಡ
ಬೆಂಗಳೂರು ದಿನಾಂಕ: 07-03-2018

## ಅಧಿಸೂಚನೆ

ವಿಷಯ:- ಖಾಸಗಿ ವಿಶ್ವವಿದ್ಯಾಲಯಗಳ ಇಂಜಿನಿಯರಿಂಗ್ ಕೋರ್ಸುಗಳಿಗೆ ನಿಗದಿತ ವಿದ್ಯಾರ್ಥಿ ಪ್ರಮಾಣಕ್ಕಿಂತ ಹೆಚ್ಚುವರಿ ಪ್ರವೇಶವನ್ನು ಮಾಡಿಕೊಂಡಿರುವ ಕುರಿತು.

ಉಲ್ಲೇಖ:- ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್, ಬೆಂಗಳೂರು, ಇವರ ಪತ್ರ ಸಂಖ್ಯೆ:KSHEC/ PVT.Act/ 35/2016-17/1144, ದಿನಾಂಕ 21-9-2017.

---

ರಾಜ್ಯದ ಖಾಸಗಿ ವಿಶ್ವವಿದ್ಯಾಲಯಗಳಲ್ಲಿ ಅಸ್ತಿತ್ವದಲ್ಲಿರುವ ಇಂಜಿನಿಯರಿಂಗ್ ಕೋರ್ಸುಗಳ ಪ್ರತಿ ವಿಭಾಗಗಳಿಗೆ ನಿಗದಿತ ವಿದ್ಯಾರ್ಥಿ ಪ್ರಮಾಣಕ್ಕಿಂತ ಹೆಚ್ಚಾಗಿ (ಪ್ರತಿ ವಿಭಾಗದಲ್ಲಿ 600-800) ವಿದ್ಯಾರ್ಥಿಗಳಿಗೆ ಪ್ರವೇಶ ನೀಡಿದ್ದು, ಈ ಬಗ್ಗೆ ಸೂಕ್ತ ಕ್ರಮವನ್ನು ಜರುಗಿಸುವಂತೆ ಕರ್ನಾಟಕ ರಾಜ್ಯದಲ್ಲಿರುವ ಇಂಜಿನಿಯರಿಂಗ್ ಕಾಲೇಜುಗಳ ಪ್ರಾಂಶುಪಾಲರುಗಳು ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತಿಗೆ ಮನವಿ ಸಲ್ಲಿಸಿರುತ್ತಾರೆ. ಈ ಕುರಿತು, ಖಾಸಗಿ ವಿಶ್ವವಿದ್ಯಾಲಯಗಳಾದ ಅಜೀಮ್ ಪ್ರೇಮ್‌ಜಿ ವಿಶ್ವವಿದ್ಯಾಲಯ, ಅಲಿಯನ್ಸ್ ವಿಶ್ವವಿದ್ಯಾಲಯ, ರೇವಾ ವಿಶ್ವವಿದ್ಯಾಲಯ, ಎಂ.ಎಸ್.ರಾಮಯ್ಯ ಅನ್ವಯಿಕ ವಿಜ್ಞಾನಗಳ ವಿಶ್ವವಿದ್ಯಾಲಯ, ಪಿ.ಇ.ಎಸ್. ವಿಶ್ವವಿದ್ಯಾಲಯ, ಸಿ.ಎಂ.ಆರ್. ವಿಶ್ವವಿದ್ಯಾಲಯ, ದಯಾನಂದ ಸಾಗರ ವಿಶ್ವವಿದ್ಯಾಲಯ, ದಿ ರೈ ತಾಂತ್ರಿಕ ವಿಶ್ವವಿದ್ಯಾಲಯ ಮತ್ತು ಪ್ರೆಸಿಡೆನ್ಸಿ ವಿಶ್ವವಿದ್ಯಾಲಯ - ಇಲ್ಲಿ ನಡೆದಿರಬಹುದಾದ ಸಂಭಾವ್ಯ ಅಕ್ರಮಗಳ ಬಗ್ಗೆ ಮತ್ತು ಸರ್ಕಾರದ ಅಧಿಸೂಚನೆಯನ್ವಯ ವಿದ್ಯಾರ್ಥಿ ಪ್ರವೇಶ ನೀಡಿರುವ ಬಗ್ಗೆ ಪರಿಶೀಲಿಸಲು ಒಂದು ಉನ್ನತ ಅಧಿಕಾರದ ಸಮಿತಿ (High Power Committee)ಯನ್ನು ರಚಿಸಬಹುದಾಗಿದೆಯೆಂದು ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ ಇವರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಅದರಂತೆ ಉನ್ನತ ಅಧಿಕಾರದ ಸಮಿತಿ (High Power Committee)ಯನ್ನು ಈ ಕೆಳಕಂಡಂತೆ ರಚಿಸಿ ಅಧಿಸೂಚನೆ ಹೊರಡಿಸಲಾಗಿದೆ.

| | | |
|---|---|---|
| 1 | ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್, ಬೆಂಗಳೂರು. | - ಅಧ್ಯಕ್ಷರು |
| 2 | ಡಾ. ಸೈಯದ್ ಶಕೀಬ್-ಉರ್-ರೆಹಮಾನ್, ನಿವೃತ್ತ ಪ್ರಾಂಶುಪಾಲರು, ಎಸ್.ಜೆ.ಸಿ.ಇ. ಮೈಸೂರು, ಹಾಲಿ ವಿಶ್ವೇಶ್ವರಯ್ಯ ತಾಂತ್ರಿಕ .ತಾಂ.ವಿಶ್ವವಿದ್ಯಾಲಯದ ಕಾರ್ಯಕಾರಿ ಸಮಿತಿಯ ಸದಸ್ಯರು, 140, 6ನೇ ಮುಖ್ಯರಸ್ತೆ, ಸುಭಾಷ್ ನಗರ, ಮೈಸೂರು-570 007. | - ಸದಸ್ಯರು |
| 3 | ಡಾ. ಎಂ.ಕೆ.ವೆಂಕಟೇಶ, ಎಐಸಿಟಿಇ ಯ ಹಿಂದಿನ ಸಲಹೆಗಾರರು, ಹಾಲಿ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯದ ಅಕಾಡೆಮಿಕ್ ಸೆನೇಟ್ ಸದಸ್ಯರು, ಪ್ರಾಂಶುಪಾಲರು, ಆರ್.ಎನ್.ಎಸ್. ಇನ್ಸ್‌ಟಿಟ್ಯೂಟ್ ಆಫ್ ಟೆಕ್ನಾಲಜಿ, ಚನ್ನಸಂದ್ರ, ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು-560 061. | - ಸದಸ್ಯರು |
| 4 | ಡಾ. ಐ.ಎಸ್.ಶಿವಕುಮಾರ, ಡೀನರು, ವಿಜ್ಞಾನ ನಿಕಾಯ, ಗಣಿತಶಾಸ್ತ್ರ ವಿಭಾಗ, ಜ್ಞಾನ ಭಾರತಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-560 056. | - ಸದಸ್ಯರು |
| 5 | ಡಾ. ವಿ.ಸುದೇಶ್, ಡೀನರು, ಕಾನೂನು ನಿಕಾಯ, ವಿಶ್ವವಿದ್ಯಾಲಯ ಕಾನೂನು ಕಾಲೇಜು, ಜ್ಞಾನ ಭಾರತಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-560 056. | - ಸದಸ್ಯರು |
| 6 | ಡಾ. ಹೆಚ್.ಎನ್.ರಮೇಶ್, ಪ್ರಾಧ್ಯಾಪಕರು, ಸಿವಿಲ್ ಇಂಜಿನಿಯರಿಂಗ್ ವಿಭಾಗ, ಯುವಿಸಿಇ, ಜ್ಞಾನ ಭಾರತಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-560 056. | - ಸದಸ್ಯರು |
| 7 | ಸರ್ಕಾರದ ಉಪಕಾರ್ಯದರ್ಶಿ, ವಿಶ್ವವಿದ್ಯಾಲಯ, ಉನ್ನತ ಶಿಕ್ಷಣ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು-560 001. | -ಸದಸ್ಯ ಕಾರ್ಯದರ್ಶಿ |

8/3/18

Terms of Reference:-

1. ತಾಂತ್ರಿಕ ಶಿಕ್ಷಣವನ್ನು ಬೋಧಿಸುತ್ತಿರುವ ರಾಜ್ಯದ ಪ್ರತಿಯೊಂದು ಖಾಸಗೀ ವಿಶ್ವವಿದ್ಯಾಲಯಗಳಲ್ಲಿ, ಸದರಿ ತಾಂತ್ರಿಕ ಶಿಕ್ಷಣವನ್ನು ಬೋಧಿಸಲು ಎಐಸಿಟಿಇ ನಿಯಮಗಳು/ಮಾನದಂಡದಂತೆ ಮೂಲಭೂತ ಸೌಕರ್ಯಗಳನ್ನು ಹೊಂದಿರುವ/ ಹೊಂದಿಲ್ಲದಿರುವ ಬಗ್ಗೆ.
2. ಸದರಿ ತಾಂತ್ರಿಕ ಶಿಕ್ಷಣವನ್ನು ಬೋಧಿಸಲು ಎಐಸಿಟಿಇ/ ಯುಜಿಸಿ ನಿಯಮಗಳು/ ಮಾನದಂಡದನ್ವಯ ವಿದ್ಯಾರ್ಥಿಗಳ ಪ್ರವೇಶಾತಿಗೆ ಅನುಗುಣವಾಗಿ, ಅಗತ್ಯ ಮೂಲಭೂತ ಸೌಕರ್ಯಗಳು ಇರುವ ಬಗ್ಗೆ ಮತ್ತು ವಿದ್ಯಾರ್ಥಿಗಳ ಪ್ರವೇಶಾತಿ ಸಂಖ್ಯೆಗೆ ಅನುಗುಣವಾಗಿ ವಿದ್ಯಾರ್ಥಿ/ಬೋಧಕರ/ಬೋಧಕೇತರರ ಅನುಪಾತವು ಇರುವ/ಇಲ್ಲದಿರುವ ಬಗ್ಗೆ.
3. ಯಾವುದೇ ಖಾಸಗೀ ವಿಶ್ವವಿದ್ಯಾಲಯವು ಪ್ರಸ್ತುತ ಹೊಂದಿರುವ ಮೂಲಭೂತ ಸೌಕರ್ಯಗಳು ಮತ್ತು ಬೋಧಕ/ ಬೋಧಕೇತರರ ನೇಮಕಾತಿಗಳು ಎಐಸಿಟಿಇ/ ಯುಜಿಸಿ ನಿಯಮಗಳನ್ವಯ ಇರುವ ಬಗ್ಗೆ.
4. ಯಾವುದೇ ಖಾಸಗೀ ವಿಶ್ವವಿದ್ಯಾಲಯವು ಪ್ರಸ್ತುತ ಹೊಂದಿರುವ ಮೂಲಭೂತ ಸೌಕರ್ಯಗಳು ಮತ್ತು ಬೋಧಕ/ ಬೋಧಕೇತರರಿಗೆ ಹೋಲಿಕೆ ಮಾಡಿದಲ್ಲಿ, ಆ ವಿಶ್ವವಿದ್ಯಾಲಯಕ್ಕೆ ನಿಗದಿಪಡಿಸಬಹುದಾದ ವಿದ್ಯಾರ್ಥಿಗಳ ಪ್ರವೇಶಾತಿಯ ಸಂಖ್ಯೆಯ ಬಗ್ಗೆ.
5. ನೀಟ್ ಕೌನ್ಸಲಿಂಗ್ ಸಮರ್ಪಕವಾಗಿ ನಡೆಸುತ್ತಿರುವ ಬಗ್ಗೆ.
6. ಪ್ರವೇಶಾತಿ/ ಸೀಟನ್ನು ರದ್ದುಪಡಿಸಿದಲ್ಲಿ ವಿಧಿಸಲಾಗುತ್ತಿರುವ ಶುಲ್ಕದ ಬಗ್ಗೆ.
7. ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ಶುಲ್ಕಗಳನ್ನು ಮತ್ತು ಸರ್ಕಾರಿ ಪ್ರಾಧಿಕಾರಗಳಿಂದ ಪಡೆದ ವಿದ್ಯಾರ್ಥಿ ವೇತನಗಳನ್ನು ಸಮರ್ಪಕವಾಗಿ ಸಂಬಂಧಿಸಿದ ಫಲಾನುಭವಿಗಳಿಗೆ ವರ್ಗಾಯಿಸುತ್ತಿರುವ ಬಗ್ಗೆ.
8. ಯಾವುದೇ ಖಾಸಗೀ ವಿಶ್ವವಿದ್ಯಾಲಯವು ಮೇಲಿನ ಯಾವುದೇ ಅಂಶಗಳಿಗೆ ವ್ಯತಿರಿಕ್ತವಾಗಿ ಕಾರ್ಯನಿರ್ವಹಿಸುತ್ತಿದ್ದಲ್ಲಿ, ಇದರ ವಿರುದ್ಧ ನಿಯಮಾನುಸಾರದಂತೆ ಸರ್ಕಾರವು ಕೈಗೊಳ್ಳಬಹುದಾದ ಕ್ರಮಗಳ ಬಗ್ಗೆ.

ಸಮಿತಿಯು ಮೇಲ್ಕಂಡ ಅಂಶಗಳ ಬಗ್ಗೆ ತನಿಖೆ ನಡೆಸಿ ಒಂದು ತಿಂಗಳೊಳಗಾಗಿ ಸೂಕ್ತ ಶಿಫಾರಸ್ಸಿನೊಂದಿಗೆ ಸರ್ಕಾರಕ್ಕೆ ವರದಿಯನ್ನು ಸಲ್ಲಿಸತಕ್ಕದ್ದು.

07/03/18

(ಎಂ.ಎ. ಅಹಮದ್ ಜಾನ್)
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ವಿಶ್ವವಿದ್ಯಾನಿಲಯಗಳು-2)

9/3/18

ಇವರಿಗೆ
ಸಮಿತಿಯ ಅಧ್ಯಕ್ಷರು ಮತ್ತು ಸದಸ್ಯರುಗಳಿಗೆ.

ಪ್ರತಿ:-
1) ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್, ಅರಮನೆ ರಸ್ತೆ, ಬೆಂಗಳೂರು.
2) ಮಾನ್ಯ ಉನ್ನತ ಶಿಕ್ಷಣ ಮಂತ್ರಿಗಳ ಆಪ್ತ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು.
3) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿಗಳು ಉನ್ನತ ಶಿಕ್ಷಣ ಇಲಾಖೆ.
4) ಸರ್ಕಾರದ ಉಪ ಕಾರ್ಯದರ್ಶಿಯವರ ಆಪ್ತ ಸಹಾಯಕರು ವಿಶ್ವವಿದ್ಯಾಲಯಗಳು ಶಾಖೆ.

15/3/18